# ಪ್ರಸ್ತಾವನೆ



ಕನ್ನಡ” “ಕನ್ನಡ”ವೆಂದು ಕೂಗಿಕೊಳ್ಳುವ ಎಷ್ಟೋ ಕನ್ನಡಿಗರು ವಾಙ್ಮಯಾಂಗದ ಮುಖ್ಯ ಎರಡು ಅವಯವಗಳಾದ ಗದ್ಯ ಪದ್ಯಗಳಲ್ಲಿ ಪದ್ಯವನ್ನು ತುಚ್ಛೀಕರಿಸಿ ಗದ್ಯಕ್ಕೇನೆ ಶ್ರೇಷ್ಠತೆಯನ್ನು ಕೊಡುತ್ತಿರುವರು. ಆದರೂ ಕವಿತೆಗಳನ್ನು ಬರೆಯುವವರ ಸಂಖ್ಯೆಯು ಹೆಚ್ಚಾದ ಪ್ರಮಾಣದಿಂದ ಕವಿತೆಗಳನ್ನು ಓದುವವರ ಪ್ರಮಾಣವು ಹೆಚ್ಚಾಗಿಲ್ಲವೆಂದು ಹೇಳಲು ವಿಷಾದವೆನಿಸುವದು. ಸೂಕ್ಷ್ಮರೀತಿಯಿಂದ ಹೇಳಬೇಕಾದರೆ ಪದ್ಯವು ಸ್ವರೂಪ. ಪ್ರಾಸ, ಕವಿತೆಗಳಲ್ಲಿ ಉಪಯೋಗಿಸುವ ಶಬ್ದರೂಪ, ಮತ್ತು ಶಬ್ದಗಳು, ಇವುಗಳಿಂದ ಓದಲು ಸ್ವಲ್ಪ ಕಠಿಣವೆನಿಸಬಹುದು. ಸ್ವಲ್ಪ ವಿಚಾರಮಾಡಿ ನೋಡಿದರೆ ಪದ್ಯವೇ ಗದ್ಯಕ್ಕಿಂತಲೂ ಹೆಚ್ಚಿಗೆ ಹೃದ್ಯವಾಗುವದರಲ್ಲಿ ಸಂಶಯವೇ ಇಲ್ಲ. ಗದ್ಯದಲ್ಲಿಯ ಹುರುಳಿನಿಂದ ದೊರೆಯುವ ಸುಖವು ಪದ್ಯದಲ್ಲಿ ದೊರೆಯುವದು ಸ್ಪಷ್ಟವು; ಆದರೆ ಪ್ರಾಸ, ಸ್ವರೂಪ, ರಸಾಲಂಕಾರ ಮೊದಲಾದವುಗಳಿಂದ ಓದುವವರಿಗೂ ಕೇಳುವವರಿಗೂ ಆಗುವ ಆನಂದವು ಗದ್ಯದಿಂದಾಗದು. ಆದ್ದರಿಂದ ಸ್ವಲ್ಪ ಆಯಾಸವೆನಿಸಿದರೂ ಲೆಕ್ಕಿಸದೆ ಪದ್ಯದಕಡೆಗೆ ಹೆಚ್ಚು ಲಕ್ಷಗೊಟ್ಟರೆ ಪದ್ಯದಿಂದಾಗುವ ಆನಂದಲಾಭವು ವಾಚಕರಿಗೆ ದೊರಕುವದೇ

ಹೊರ್ತು ಲೆಕ್ಕಣಿಕೆಯಿಂದ ವರ್ಣಿಸಲಸಾಧ್ಯವು.

ಆದ್ದರಿಂದ ನನ್ನ ಅಲ್ಪಮತಿಗೆ ತಿಳಿದಂ
(೧) 'ಸ್ವರಾಜ್ಯ ಸ್ಥಾಪನೆ' ಎಂಬ ಪದ್ಯರೂಪವ
ಯನ್ನೂ (೨) ಕರ್ನಾಟಕ ಮಹಾವಿದ್ಯಾಲಯ
ಡಕೂಟದಿಂದ ಬಹುಮಾನವನ್ನು ಪಡೆದ 'ಹ
**ವೆಂಬ'** ವರ್ಣನಾಪರ ಕವಿತೆಯನ್ನೂ ಈ ಚಿಕ್ಕ
ದಲ್ಲಿ ಬರೆದಿದ್ದೇನೆ. ವಾಚಕರು ಇದರಲ್ಲಿಯ ದೋಷ
ಪದೆ ಬರಹಗಾರರಿಗೆ ಉತ್ತೇಜನಕೊಡುವಿರೆಂದು ನ

ಕವಿತಾ ಕಾಮಿನೀ ಕಾಮುಕ,

ರಾಘವೇಂದ್ರ.










ಒಂದುದಿನ ಹರಿಹರನು ಮೃಗಯಾವಿಹಾರಕ್ಕೆಂದು, ಕೆಲವು ಬೇಟೆಗಾರರಿಂದಲೂ, ಬೇಟೆಯ ನಾಯಿಗಳಿಂದಲೂ ಸಹಿತವಾಗಿ ತುಂಗಭದ್ರಾನದಿಯ ತೀರದಮೇಲಿನ ಕಾನನಕ್ಕೆ ಹೋದನು ಅಲ್ಲಿ ಬೇಟೆ ಯಾಡುತ್ತಾಡುತ್ತ ಅಡವಿಯ ಒಂದು ಭಾಗಕ್ಕೆ ಬರಲು ಅವನ ಮನಸ್ಸಿನಲ್ಲಿ ಒಂದುತರದ ಆನಂದವೂ ಶಾಂತತೆಯೂ, ಉದ್ಭವಿಸಿದವು. ಅದೇ ಸಮಯಕ್ಕೆ ಉಗ್ರವಾದ ಒಂದು ಹುಲಿಯೂ, ಒಂದು ಸಿಂಹವೂ, ಅವರ ಕಣ್ಣೆದುರಿಗೆ ಬಂದವು. ಅವುಗಳನ್ನು ನೋಡಿದಾಕ್ಷಣವೇ ನಾಯಿಗಳು ಅವುಗಳಮೇಲೆ ಹೋಗಿ ಬಿದ್ದವು. ಹುಲಿ ಸಿಂಹಗಳಿಗೂ ನಾಯಿಗಳಿಗೂ ಕೆಲಹೊತ್ತಿನತನಕ ಕದನವು ನಡೆದರೂ, ಯಾವಪ್ರಾಣಿಗಳಿಗೂ, ಘಾಯವಾಗಲಿಲ್ಲ. ಅಷ್ಟರಲ್ಲಿ ಒಂದು ಮೊಲವು ಓಡಿಬಂದು ವಿಚಿತ್ರವೆನಿಸುವಂತೆ ಆ ನಾಯಿಗಳನ್ನೇ ಕಚ್ಚಲಾರಂಭಿಸಲು ನಾಯಿಗಳೆಲ್ಲವೂ ಚದುರಿ ಓಡಿದವು. ಆ ಮೇಲೆ ಹುಲಿಸಿಂಹಗಳು ಸುಮ್ಮನೆ ತಿರುಗಿ ಹೋದವು. ಮೊಲವುಸಹಿತ ಮಟಾಮಾಯವಾಯಿತು. ಇಷ್ಟೆಲ್ಲ ಸಂಗತಿಯನ್ನು ನೋಡಿ ಹರಿಹರನು ಇನ್ನು ಮೇಲೆ ಬೇಟೆಯಾಡಲಿಕ್ಕೆ ಮುಂದೆ ಹೋಗುವದು ತರವಲ್ಲವೆಂದೆಣಿಸಿ, ಹಿಂತಿರುಗಿ ಬರುತ್ತಿರಲು, ದಾರಿಯಲ್ಲಿ ಒಬ್ಬ

ಮುನಿಯನ್ನು ಕಂಡು, ನಡೆದ ವೃತ್ತಾಂತವನ್ನು
ಹೇಳಲು, ಆತನು ಆ ಸ್ಥಾನವು ಬಹು ಪವಿತ್ರ ಭ
ದು ಹೇಳಿ, ಅಲ್ಲಿಒಂದು ಪುರ ನಿರ್ಮಾಣಮಾಡೆಂದೂ
ತನ್ನ ರಾಜಧಾನಿಯಾಗಿ ಭಾವಿಸೆಂದೂ ಹರಿಹರ
ದೇಶಿಸಿದನು. ಅದರಂತೆ ಹರಿಹರನು ಒಂದು ನ
ಕಟ್ಟಿಸಿ ಆ ಮುನಿಯ ಹೆಸರಿನಿಂದಲೇ ಅದಕ್ಕೆ '
ಣ್ಯಪುರ' ವೆಂದು ಹೆಸರಿಟ್ಟು ಆತನನ್ನೇ ತನ್ನ ಗು
ಭಾವಿಸಿಕೊಂಡನು. ಮುಂದೆ ಕೆಲಕಾಲ ಗತಿಸಲ
ರನ ತಮ್ಮಂದಿರ ಪ್ರತಾಪ ಕೀರ್ತಿಗಳು ವೃದ್ಧಿಯಾ
ದಿ ಚಕ್ರಾಧಿಪತ್ಯವು ವಿಶಾಲವಾಗಲು, ಆ ಪುರಕ
ಯ ನಗರ' ವೆಂಬ ಹೆಸರು ಪ್ರಾಪ್ತವಾಯಿತು.

॥ ಶ್ರೀ ಲಕ್ಷ್ಮೀ ನರಸಿಂಹ ಪ್ರಸನ್ನ ॥

# ಸ್ವರಾಜ್ಯ ಸ್ಥಾಪನೆ.

( ಭಾಮಿನೀ ಷಟ್ಪದಿ )

ಒಂದುದಿನ ಮೃಗಯಾವಿಹಾರ ।
ಕ್ಕೆಂದು ಹರಿಹರರಾಯ ಹೊರಟನು ।
ಚಂದ ಹಯವನ್ನೇರಿ, ತುಂಗೆಯ ನೆರೆಯ ಕಾನನಕೆ ॥
ಸಂದ ಬೇಟೆಯನಾಯ್ಗಳೊಡನೆ ಪು ।
ಳಿಂದ ವೃಂದವು ಸಡಗರದಿ ಬಹು ।
ಹಿಂದುಗಡೆಯೊಳ್ ನಡೆದಿತದನೇನೆಂಬೆ ವೈಭವವ ॥೧॥

ಪ್ರಳಯಕಾಲದ ಮೇಘ ಪಂಕ್ತಿಯೊ ? ।
ಕಲಿಯುಗದ ತಮನಿಕರವೋ ? ಪೇಳ್ ।
ಹೊಳೆವ ವಿದ್ಯುದ್ದೀಪಗಳು ತಾವ್ ದೊಡ್ಡ ಪುರಗಳಲಿ ॥
ಸ್ಥಳವನೀಯದೆ ಕ್ರೂರತನದಿಂ ।
ದಲಿ ವಿಪಿನಕಟ್ಟೈರುತಿರುವ ಕ ।
ತ್ತಲೆಯೊ? ಎಂಬೋಲ್ ಶಬರಪಡೆ ಕಾಣಿಸಿತು
ಮಾರ್ಗದಲಿ ॥ ೨ ॥

ಮೆರೆಯುತಲಿ ವಿರಹಿಗಳ ಬೇಟೆಗೆ ।
ಬರುತಿರುವ ಪೂಸರನೊ ? ದುಷ್ಟಾ ।
ಸುರರ ಸಂಗಡ ಸಡಗರದಿ ಸಲೆ ಕಾದಲೈತರುವ ॥
ಸುರಪತಿಯೊ ? ಪೇಳ್ ಭುವನತಮಪಹ ॥
ಹರಿಸನಡೆದಿಹ ಚಂದಿರನೊ ? ಎನೆ ।
ಹರಿಹರನು ಕಣ್ಗೊಳಿಸಿದನು ಕಾನನದ ಮಾರ್ಗದಲೀ
॥ ೩ ॥

ಹರಿದು ಬರುವಂತೆಸೆವ ನಡೆಗೆಯ ।
ಹರಿಯದಾಸನ ಹರಣ ಮಾಡುವ ।
ತೆರದಿ ತೋರುತ್ತಿರಲು; ಸುಲಭದಿ ಪಶುಪತಿಗಳೆನಿಪ ॥
ಹರಿಗಳಂ, ನಿಜ ವೀರ್ಯದಿಂ ಸಂ ।
ಹರಿಪ ಕಾರಣದಿಂದಲೇ ಹರಿ ।
ಹರನು ತಾನೆನ್ನುವಭಿಧಾನವ ಧರಿಪನಂತೆಸೆದಾ ॥೪॥

ಹೀಗೆ ಹರಿಹರರಾಯ ಹರುಷದಿ ।
ಮೇಘವರ್ಣದ ಶಬರವೃಂದದಿ ।
ಸಾಗಿರಲು ಕಾರ್ಮುಗಿಲಿಂದಸಮೇತವಾಗಿರುವ ॥
ಮೇಘಗಳ ಪಂಕ್ತಿಯೊ? ವಿವೇಕವು ।
ಭಾಗಿಯಿಹ ಯೌವನತಮವೊ! ಎನೆ ।
ಆಗಭಾವನೆ ಜನಿಸುತಿರವರು ವನಕೆ ತಲ್ಪಿದರು ॥೫॥

ಹುಲಿಕರಡಿಸಿಂಹಾದಿ ಮೃಗಗಳು ।
ಗಿಳಿ ಗಿಡಗ ಗರುಡಾದಿ ವಿಹಗಂ ।
ಗಳತಿಶಯದಿಂ ತುಂಬಿ ಭೀಕರ ವೆನಿಪುದಾ ಅಟವೀ ॥
ಬಲು ನಿಬಿಡವಾಗಿರ್ದ ವೃಕ್ಷಗ ।
ಳೆಲೆಗಳೊಳಗಿಂ ಬಿಸಿಲು ಬೀಳಲು ।
ನೆಲದಮೇಲ್, ನಕ್ಷತ್ರಮಯನಭದಂತೆ ವನವಿಪ್ಪುದು ॥೬॥

ಈ ತರದ ಕಾನನದಿ, ಪಶುಗಳ ।
ಘಾತಿಪಾ ಹರಿಹರನ ಭೃತ್ಯ ।
ವ್ರಾತದಿಂ ಕೇಳ್ಬರುವಸ್ವರ, ಮೇಣ್ ಹಾಸೊಳಾಂತಲ್ಲಿ ॥

ಐತರುವ ಬಹಳುಗ್ರರೂಪದ ।
ಜಾತಿನಾಯಿಗಳಧಿಕವಾಗಿಹ ।
ಭೀತಿಯನ್ನುದ್ಭವಿಸುತಿದ್ದವು ಪೇಳಲೇನದನು ॥ ೭ ॥

ತ್ವರಿತದಿಂದಾ ಬೇಟೆಗಾರರು ।
ಪುರದಿ ನಾಯ್ಗಳ ಬಿಟ್ಟು, ಹೊಡಿ! ಜಡಿ! ।
ಸರಿದುನಿಲ್! ಕಡಿ! ಕೊಲ್ಲು! ಇರಿ! ಬಡಿ! ಬೊಬ್ಬೆ
ಗುಡು ಎಂದು ॥
ತರತರದ ದನಿಗೈಯುತಲೆ ಒಹು ।
ತರದ ಪಶುಗಳ ಧ್ವಂಸಿಸುತ ನಡೆ ।
ದಿರಲಧಿಕ ಭಯ ಜನಿಪುದಾಯ್ತಾ ನೋಟವಟವಿ
ಯಲೀ ॥ ೮॥

ಕೆಲವು ಕಾಲೀತೆರದಿ ಮೃಗಗಳ ।
ಕೊಲುತ ಹರಿಹರರಾಯ ಮುಂದಕೆ ।
ಒಲುಸುಖದಿ ಸಾಗಿರಲು ಮುಟ್ಟಿದನೊಂದು ಸ್ಥಾನಕ್ಕೆ॥
ತಿಳಿಯದಲೆ ಕಾರಣವವನಿಗೊ ।
ನ್ಮೈಲೆ ಮನದೊಳಾನಂದ ಶಾಂತತೆ ।
ಗಳು ಜನಿಸಿದವುನೋಡಲಾಕ್ಷಣದಾ ಪ್ರದೇಶವನು॥೯॥

ಅನಿತರೊಳಗರ್ಭಟಿಸುತತಿಭಯ ।
ಜನಿಪ, ಕೇಸರಿರಾಜನಿಂದಲೆ ।
ನದ ರಾಜ್ಯವ ಸೆಳೆದುಕೊಂಡೋಲ್ ಮೆರೆವ ಹುಲಿ
ಯೊಂದು ॥

ಕ್ಷಣ ಸಹಾಂತರವಿಲದೆ, ಪರಮೇ ।
ಶನಬಳಿಯ ಒಹು ಭವ್ಯ ಪಂಚಾ ।
ನನದತೀರ ಹರಿಯೊಂದು ಕಂಡವು ಕಣ್ಣಿನೆದು
॥

ನೋಡಲಾ ಅತಿ ಕ್ರೂರ ಪಶುಗಳ ।
ಮಾಡದಾದರು ಮುಂದೆ ಕಾರ್ಯವ ।
ನಾಡರೊಂದೂ ಶಬ್ದವಾಜನರಾಗ ಚಿತ್ರದೋ
ಓಡಿದವು ಶೀಘ್ರದಲಿ ನಾಯ್ಗಳು ।
ನೀಡಿ ಯಮನಿಗೆ ರಣದಿ ದೇಹವ ।
ನೋಡಿ ವೈರಿಯ ಮೇಲೆ ಬೀಳುವ ಭಟರ

ನಾಶ ಕಾಲವು ತಮ್ಮ ನಿಜವಾ ।
ದೀಶರಿಗೆ ಬರಬಾರದೆನ್ನುತ ।
ದಾಸರಂದದಿ ನಡಿಸಿಕೊಳ್ಳುವ ಹೊಸಪತಿಗಳ
ಆ ಶಬರವೃಂದವನು ಬಿಟ್ಟು ವಿ ।
ಲಾಸದಿಂ ರಕ್ಷಿಸಲವನ್ನೆನೆ ।
ಕೇಸರಿವ್ಯಾಘ್ರಗಳ ನಾಯ್ಗಳು ಸುತ್ತುಗಟ್ಟಿದ

ಕಾನನದ ಮಧ್ಯದಲಿ ನಡೆದಿಹ ।
ಶ್ವಾನ ಹುಲಿ ಸಿಂಹಗಳ ಯುದ್ಧದ ।
ಲೇನು ಬಣ್ಣಿಪೆ, ಕೊಲ್ವಯತ್ನವನೊಂದನ
ಮೇಣು ತಪ್ಪಿಸಿಕೊಳ್ಳುವವುಗಳ ।
ಜಾಣತನವನ್ನಿಂತು ಯಾವ ।
ಪ್ರಾಣಿಗಳಿಗೂ ಘಾಯವಾಗದೆ ಕದನ ನಡೆ

ನಾಯಿಗಳು ಬಹು ಕೋಪದಿಂದಲೆ ।
ಮೈಯನುಬ್ಬಿಸಿ ಜಿಗಿ ಜಿಗಿಯುತಲೆ ।
ಬಾಯಿ ತೆರೆದಾ ಶತ್ರುಗಳ ಮೇಲೇರಿ ಬರುತಿರಲು ॥
ಪ್ರಿಯ ಕೇಸರಿಯರ್ಭಕಗಳನಿ ।
ಕಾಯ ತಮ್ಮಯ ಹಿರಿಯರೊಡನತಿ ।
ಮಾಯೆಯಿಂ ಚಲ್ಲಾಟವಾಡುವ ತೆರದಲೆಸೆದಿಹವು
॥ ೧೪ ॥

ಅದೆ ಸಮಯದತಿ ಶಯಿತವೇಗದಿ ।
ಮೃದು ಶರೀರದ ಶುಭ್ರಲಘು ರೂ ।
ಪದ ಮೊಲವು ತಾನೊಂದು ಬಂದಾ ಶುನಕಗಳಮೇಲೆ॥
ಅಧಿಕ ಬಲದಿಂಬಿದ್ದು ಕಚ್ಚುತ ।
ಕದುರಿಸಾರಂಭಿಸಿತಹವುಗಳ ।
ಸದರ ಚಿತ್ರಚಮತ್ಕೃತಿಯ ನಾನೆಷ್ಟು ವರ್ಣಿಸಲಿ॥೧೫॥

ಮೊಲವು ಕಡಿದೋಡಿಪುದು ನಾಯ್ಗಳ ।
ಳಿಯೊಳಿದು ಕಾಣ್ಬರುವದೇನ್ಬೈ ? ।
ಮೊಲವದಲ್ಲೀ ಮೃತ್ಯುಲೋಕದ್ದೆಂಬೆನದರಿಂದ ॥
ಲಯುತಾರಿಯ ಕರದಿ ಸಿಕ್ಕಿರು ।
ಲಿಹ ನಿಜರಾಜನನು ತಪ್ಪದ ।
ಳಿಸಿಕೊಂಬುವ ವೀರನರನಂತೆಸೆದಿತಾಮೊಲವು
॥ ೧೬ ॥

ಮರುಳಿ ಬೆದರೋಡುತಿರೆ ನಾಯಿಗ ।
ಯ ಬೆನ್ನಟ್ಟದಲೆ ಪೋದವು ।
ಪರಾಕ್ರಮಿಯಂತೆ ಸುಮ್ಮನೆ ಸಿಂಹ ವ್ಯಾಘ್ರ
ಗಳು ॥

ತ್ವರಿತದಿಂ ಮರೆಯಾಗುತಿರವುಗ ।
ಳರಿಯುದಲೆ ಪೊಲ ಮಾಯವಾಯಿತು ।
ತಿರುಗಿಬಂಪವು ಬಳಿಕನಾಯ್ಗಳು ಶಬರರೆಡೆಯಲ್ಲಿ

ಎಲ್ಲ ವೃತ್ತಾಂತವನು ನೋಡುತ ।
ಲಲ್ಲಿ ನಿಂತ ಕಿರಾತ ಜನಮನ ।
ದಲ್ಲಿ ಭಯವಾಶ್ಚರ್ಯ ವುದ್ಭವಿಸಿದ್ದುದಚ್ಚರಿಯ
ಕಲ್ಲಿನಂತಿರಲವರು ಮೌನದಿ, ।
ತಲ್ಲಣವ ಗೊಳ್ವಂತೆ ತೋರಲು ।
ಮೆಲ್ಲನೆ ವಿಚಾರದಲಿ ನುಡಿದನವರ್ಗೆ ಹರಿಹರನು

ಮುಂದೆ ಸಾಗದೆ ಬೇಡೆಯಾಡ ।
ಲ್ಕೆಂದು, ಮರುಳುವದೆಮ್ಮ ನಗರ ।
ಕ್ಕೆಂದುಲೇಸೀತೆರ ವಿಚಿತ್ರವ ಕಂಡೆವದರಿಂದ॥
ಮುಂದಿನೆಮ್ಮ ವಿಹಾರಗಳಿಗಿದು ।
ಬಂದ ತೆರನಾಗಿಹುದು ವಿಘ್ನತೆ ।
ಯೆಂದು ಹರಿಹರ ಸೂಚಿಸಲವರು ಗೈದರದರಂತೆ

ತಿರುಗಿ ಬರುತಿರೆ ತಮ್ಮ ಪುರವಂ।
ಕುರಿತು ಮಾರ್ಗದಧಿಕ ಪವಿತ್ರನಿ ।
ಪುರುತರದತೇಜಸ್ಸಿನಿಂ ಮಧ್ಯಾಹ್ನ ರವಿಯಂತೆ॥
ಮೆರೆಯುವಾಕೃತಿ ಮುದ್ರೆಯಿಂದಲಿ।
ಸ್ಮರಹರನ ಸನ್ನಿಭದಿಕಾಣುವ।
ವರತಪೋನಿಧಿ ಯೋರ್ವನನ್ನಾ ಜನರು ನೋಡಿ

ಬಂದು ಹರಿಹರ ನಿಳಿದು ಹಯವಂ।
ವಂದಿಸಲು ಮುನಿಯಡಿಗೆ ಜೋಡರ।
ವೃಂದವೆಲ್ಲವು ಬಾಗಿನಮಿಸಿತು ಭಕ್ತಿಪೂರ್ವಕದಿ॥
ಕಂದ ನಿನಾರೈ ಮಹಾತ್ಮನು?
ಎಂದು ಮುನಿವರ ಕೇಳಲಾಗಾ।
ಸಂದವರುಹಿದನೆಲ್ಲವನು ಮೇಣ್ ನಡೆದ ಸಂಗತಿಯ
॥೨೧॥

ಕೇಳಿ ವೃತ್ತಾಂತವನು ಮುನಿಕುಲ।
ಕಾಲವಾಡಿ ವಿಚಾರವನು, ಪ್ರತಿ।
ಪೇಳಿದನು ಹರಿಹರನಿಗಿಂತುಪದೇಶಗೈವಂತೆ॥
“ ಕೇಳು ರಾಜನೆ, ಸ್ನಾನವದುಬಹು।
ಕಾಲದಿಂದ ಪವಿತ್ರವೆನಿಪುದು।
ಪೇಳಲೇಂ, ಪೂರ್ವದಿ ಮಹಾ ಭಾಗ್ಯರನಿವಾಸವದು
॥೨೨॥

“ ಏ! ಮಹಿಮನೇ ಕೇಳು ಸ್ಥಳವದು।
ರಾಮಸೀತೆಯರಿಂದ ಬಹಳಭಿ।
ರಾಮತೆಯ ಪಡೆದಂಥ ಪಾವನ ಕ್ಷೇತ್ರವೆನಿಸುವದು॥
ನಾಮವಂ ಪಡೆದಾಂಜನೇಯಾ।
ಭೂಮಿಯೊಳು ರಂಜಿಸಿದನಲ್ಲಿಯು।
ದಾ ಮಹಾಮಾತಂಗ ಮುನಿಯಿಂ ಪೂತವೆನಿಸುವದು
॥೨೩॥

“ಇಂಥ ಸ್ಥಾನದಿ ರಕ್ತ ಪಾತವ।
ದೆಂತು ಸಂಭವಿಸುವದು ರಾಯನೆ।
ಹಿಂತಿರುಗಬೇಕಾಯಿತದರಿಂ ನೀನು ಮೌನದಲಿ॥
ಸಂತನೇ ನಾಂ ಪೇಳ್ವಕಾರ್ಯವ।
ಸಂತಸದಿ ಜರುಗಿಸಲು ನಿಜದಿಂ।
ಸಂತತಂ ಜಯವಾಗಿ ನೀಂ ಸುಖಪೊಂದುವಿಹಪರದಿ
॥೨೪

ಮುನಿವರನು ಹೀಗೆನಲು ನರವರ।
ವಿನಯದಿಂದಲಿ ಮಾತನಾಡಿದ।
“ನಿನಗೆ ಪೇಳಾಪುಣ್ಯ ಕಾರ್ಯವದಾವುದಿಹುದದನು
ಘನಪವಿತ್ರನಿಪಾಸುಕಾರ್ಯವ।
ಕೊನೆಯಗಾಣಿಸದಿರಲು ಹರಿಹರ।
ನೆನಿಪನಾಮವು ನನ್ನದಲ್ಲ ತಪೋನಿಧಿಯೆ,” ಎಂದ
॥೨೫

ಅರುಹಿದದು ಮುನಿ“ಯಾಪ್ರದೇಶೀ।
ಪರಿಯ ಸ್ಥಿತಿಯೊಳಗಿರುವದುಚಿತವೆ?।
ಪುರವನೊಂದನು ನಿರ್ಮಿಸೈ ನೀನಲ್ಲಿಯದರಿಂದ॥
ಹರಿಹರನೆ ಮಾಡಿಪ್ಪ ಕಾರ್ಯವ।
ನಿರುತದೊಳು ನಿನಗಾಗುವದು ಜಯ।
ವರಿಯದೇ ತವ ರಾಜಧಾನಿಸ್ಥಾನ ಪುರವೆಂದು ॥೨೬

ಆ ಪುರವು ನಿಜಶೌರ್ಯದಿಂದಲಿ ।
ಭೂಪರೆಲ್ಲರ ನಡುಗಿಸುತ್ತಲೆ ।
ಸ್ಥಾಪಿಸುವದೈ ತನ್ನ ಕೀರ್ತಿಯ ಸಕಲ ಭುವನದಲಿ ॥
ಸ್ಥಾಪನೆಯು ಕರ್ನಾಟ ರಾಜ್ಯದೆ ।
ರೂಪುಗೊಂಡು ಪ್ರಕಟವಾಗುವ ।
ದೀಪರಿಯೊಳದು ಬಾಳ್ವುದೈ ಚಿರಕಾಲ" ವೆಂದವಗೆ
॥೨೭॥



ಈತರಹದಾತನುಪದೇಶದ ।
ಮಾತನಾಲಿಸಿ ಹರಿಹರಸುತಾ ।
ಖಾತಗಾಜ್ಞೆಯ ಪಾಲಿಸುವೆನೆಂದ ಭಯವನ್ನಿತ್ತು ॥
ಆತನಾರೆಂದರಿದನಂತರ ।
ರೀತಿಯಂತಪ್ಪಣೆಯ ಪಡಕೊಂ ।
ಡಾತನಡಿಗೆಳಿಗೆರಗಿ ನಿಜನಗರಕ್ಕೆ ನಡೆತಂದಾ ॥೨೮॥

ಬಳಿಕ ಹರಿಹರರಾಯನಾಮಂ ।
ಗಳಪ್ರದೇಶದಿ ರಾಜಧಾನಿಯ ।
ಬಲುಪ್ರಯತ್ನದಿ ಕಟ್ಟಿಸಿದನದು ತನ್ನ ಸಿರಿಯಿಂದ ॥
ಹಲವುದಿನ ಪರ್ಯಂತ ವೊಂದೇ ॥
ಸ್ಥಳದಲಿದ್ದುದರಿಂದ ಬೇಸ ।
ಶ್ರೀಳಿಗೆ ಬಂದಮರಾವತಿಯ ತೆರದಿಂದ ಶೋಭಿಸಿತು
॥೨೯॥



ಕಲ್ಲಿನಿಂದಲೆ ಕಟ್ಟಿದಾಪುರ।
ದಲ್ಲಿಯಿಹ ಸಂಪತ್ತನೇನಾಂ।
ಬಲ್ಲೆ? ನದು ಋಣವೀಯುತಿತ್ತು ಕುಬೇ

ಲ್ಲಿ ಕಾಣ್ಬಹ ಶಿಲ್ಪಕಲೆಗಳ।
ನಿಲ್ಲ ಬಣ್ಣಿಸೆ ಶಕ್ತಿ, ಕೆಲವುಗ।
ಳಲ್ಲಿ ಬಂದಾ ವಿಶ್ವಕರ್ಮನು ಕಲಿತನೆಂಬುವರ

ತನಗೆ ಮಹದುಪದೇಶ ಮಾಡಿದ।
ಮುನಿಯನೇ ಗುರುವೆಂದು ತಿಳಿದನು।
ದಿನದಲವನಪ್ಪಣೆಯ ಹರಿಹರ ಪಾಲಿಸುತಲಿದ

ವಿನುತಗುರುವಿನ ನಾಮದಿಂದಾ।
ತನ ಹೆಸರುಳಿಯಲೆಂದು ಹೆಸರಿ।
ಟ್ಟನುನೃಪತಿಯಾಪುರಕೆ ವಿದ್ಯಾರಣ್ಯಪು

ಪುರವದೇಕೆಲಕಾಲ ಗತಿಸಲು।
ಹರಹರನ ಬಹು ಶೂರತಮ್ಮಂ।
ದಿರ ಸುಕೀರ್ತಿಪ್ರತಾಪಗಳು ವೃದ್ಧಿಯನು ಪ

ತ್ವರಿತದಿಂ ಚಕ್ರಾಧಿಪತ್ಯವು।
ನೆರೆವಿಶಾಲತೆಯನ್ನು ಪೊಂದಲು।
ಧರಿಸಿತೈ ಶ್ರೀ ವಿಜಯನಗರೆನ್ನುವಭಿಧ

# ಹಾಳುಪಟ್ಟಣ.

ಅರ್ಥಾತ್

(ಈಗಿನ ವಿಜಯನಗರದ ವರ್ಣನೆಯು.)

॥ ಕಂದ ॥

ಇದೆಯೇನು ! ವಿಜಯನಗರಂ ।
ಇದೆಯೇಂ ! ವಿಖ್ಯಾತರಾದ ವಿದ್ಯಾರಣ್ಯರ್ ॥
ಮುದದಿಂದಲಿದ್ದ ಮಂದಿರ ।
ವಿದೆಯೇಂ ! ಹರಿಹರನ ಸತತವಿಜಯದನಗರಂ ॥೧॥

ಭಾ॥ ವಿ॥

ಈವಾಸಂವನವಾದುದೇಂ ! ಪುರವನಾಥಂತೋ
ರ್ಪುದೇ! ನಗ್ಗದೀ ।
ದೇವರ್ಕಳ್ ನಮಿಸಲ್ಕಯೋಗ್ಯನೆ ಪ್ರಭಾವಂ ಕಾಣ
ದೇನಕ್ಕಟ ॥
ಜೀವೇಶಂತೊರೆದಿರ್ದ ನಾರಿಯತೆರಂ ಕಣ್ದೋರ್ಪ
ಳೀ! ತುಂಗೆಯು,।
ಜೀವಾತ್ಮಾರಹಿತಾದದೇಹದೊಲು ಕಾಣುತ್ತಿರ್ಪುದೆ
ನೀನೆಲಂ ॥೨॥

ವಾ॥ ಷ॥

ಎಲ್ಲಿಹುದು? ಗಜಶಾಲೆಯೇನಿನ್ನ ಗಜಶಕ್ತಿ ।
ಯೆಲ್ಲಿಹುದು? ವಿಜಯ ವಿಠ್ಠಲನಿನ್ನ ವಿಜಯಬಲ ।
ವೆಲ್ಲಿಹುದು? ಪಂಪಾಪತಿಯೆ ವಿರೂಪಾಕ್ಷನೇ ನಿನ್ನಾಕ್ಷಿ
ಯ ಪ್ರಭಾವಂ ।

ಎಲ್ಲಿರುವದುದ್ಧಾನವಿರಭದ್ರನೆ ವೀರ್ಯ ।
ವೆಲ್ಲಿರುವದುಗ್ರನರಸಿಂಹ ನಿನ್ನುಗ್ರತೆಯು ।
ದೆಲ್ಲಿಹುದು? ವಿಘ್ನಹರರೇ ನಿಮ್ಮ ವಿಘ್ನಹರಸಾ
ರ್ಥ್ಯವೀ ಸಮಯದೀ ।

ಮ॥ ವಿ॥

ಗುಣಿಗಂಭೀರನೊ! ದೈವತಾನೆದುರಿಸಲ್ ದ
ದ್ರ್ಯದಿಂದಾವೃತ
ಮನದೋಳ್ ದುಃಖಿಪಭರ್ತೃಸಕ್ತಸತಿಯೋ ? ಪ
ವ್ಯಮಂ ಪೊಂದಿ
ವನದೋಳ್ ವಾಸಿಪ ರಾಮನೋ ? ಇದಿರುಳೊ
ಮೇಘಂಗಳಿಂಪೂರಿ
ಪ್ಪನೆ ಮಾತಾಪವ ಪುಟ್ಟಿಸುತ್ತಲಿಹುದೈ, ನಮ್ಮ
ಹಾ ರಾಜ್ಯವು

॥ಕಂದ॥

ಅನವರತ ಕನ್ನಡಾಶ್ರಯ[೧] ।
ವೆನಿಸಿ ಮಹಾಶೋಕಜನಕ[೨] ಮಿರೆ ಮಾಧವಸ್ಥಾ[೩]

---

೧ ಕನ್ನಡವಕ್ಕೆ ಅಥವಾ ಕನ್ನಡ ಭಾಷೆ.
೨ ದೊಡ್ಡ ಅಶೋಕವೃಕ್ಷ ಅಥವಾ ಮಹಾದುಃಖ.
೩ ಮಾ+ಧವ (ಒಂದುತರದ ಗಿಡ) ಅಥವಾ ಮಾಧವ
ಧ್ಯಾರ

ಸನಸ್ಥಳವಾಗಿರಲೀ ಪ ॥
ಟ್ಟಣ ಕಾನನದಂತೆ ತೋರ್ಪುದೆನಯೋಗ್ಯವಿದೇಂ ॥೫॥

॥ಉ॥ ಮಾ॥

೩
ಗೌರವವನ್ನದಕ್ಕೆ ಬಿಡದೀಯುತಿಹರ್ಥವಿಹೀನವಾಗಿರಲ್, ।
೪ ೫
ಪಾದದಿತಲ್ ಯಶಂ ಯತಿಗಳಲ್ಲಿರವಾ ಕಲೆಗಳ್ ಸಹೀಚ್ಛಿಪಾ ॥
೬ ೭
ತೋರದಿರಲ್, ಗಣಂಗಳ ಪದಂಗಳು ಕಣ್ಣಿಗೆ ಕಾಣದಾಗಿರಲ್ ।
ಬೀರುವದೀಗ ಸಂಶಯವ ದೂಷಿತ ಪದ್ಯವಿದೆಂಬುವೀಪುರಂ ॥೬॥

---

ಇರುವಮನೆ ಅಥವಾ ಸ್ಥಾಪಿಸಲ್ಪಡೋಣ.
ಅರ್ಥ ಗಾಂಭೀರ್ಯ ಅಥವಾ ಸಂಪತ್ತು.
ಪದ್ಯದಲ್ಲಿಯ ವಿರತಿಗಳು ಅಥವಾ ಯತಿಶ್ರೇಷ್ಠರು.
ಮಾತ್ರೆ ಅಥವಾ ಕಲೆ (ವಿದ್ಯೆ)ಗಳು
(ಪದದಲ್ಲಿಯ)ಗಣಗಳು ಅಥವಾ ಶಿವಭಕ್ತರು.
(ಶ್ಲೋಕದ) ಚರಣಗಳು ಅಥವಾ (ಶಿವಭಕ್ತರ) ಪಾದಗಳು.

॥ಕಂದ॥

೧೦
ವರಪುರವಿದೀಗಲಕ್ಷ್ಮೀ॥
೧೧ ೧೨ ೧೩
ಸರಸತಿದುರ್ಗಾವಾಸವೆನಿಸದಿರೆ ಸಹಿತ ॥
೧೪ ೧೫ ೧೬
ಹರಿ-ಕಮಲ-ಶಿವರು ಸುಖದಿಂ ॥
ದಿರುವ ಸ್ಥಾನವಿದೆನಲ್ಕಿದಚ್ಚರಿಯಲ್ತೇ ॥೭॥

॥ಭೋ॥ಷ॥

ಜೀವದಿಂದ ಪಿಡಿದು ತರೆ ಪ್ರ।
ಭಾವದೋಳ್ ಹತಾಶರಾಗಿ।
ಜೀವಿಸುತಿಹ ದುಃಖದಿಂದಮಾತನಾಡದ॥
ರಾವಣನು ಜಯಿಸಿರುವಂಥ।
ದೇವತೆಗಳಿವರೆನುವೊಲಿರೆ।
ಭಾವನೆಯು ಜನಿಸುವದಿಲ್ಲಿ ಲಂಕೆಯೆಂದಿದು ॥೮॥

---

೧೦ ವಿಷ್ಣುವಿನ ಹೆಂಡತಿ ಅಥವಾ ಸಂಪತ್ತು.
೧೧ ಬ್ರಹ್ಮನ ಹೆಂಡತಿ ಅಥವಾ ವಿದ್ಯೆ
೧೨ ದುರ್ಗಾ-ಶಿವನ ಹೆಂಡತಿ ಅಥವಾ ದುರ್ಗ ಕೋಟೆ.
೧೩ ವಾಸಿಸುವ ಸ್ಥಳ ಅಥವಾ ಇರುವ ಸ್ಥಳ.
೧೪ ಸಿಂಹ ಅಥವಾ ವಿಷ್ಣು.
೧೫ ಒಂದು ತರದ ಚಿಗರಿ ಅಥವಾ ಬ್ರಹ್ಮ.
೧೬ ನರಿ ಅಥವಾ ಮಹೇಶ್ವರ.

॥ವಾ॥ಷ॥

ಭುವನದೊಳಗಮರಾವತಿಯ ಮೀರ್ವನಗರಂವು।
ದ್ಭವಿಸಿರುವದಂ ಕೇಳಿ, ನೋಡಬೇಕದನೆಂಬ।
ಲವಲವಿಕೆಯಿಂ ಧಾವಿಸುತ ಸ್ವರ್ಗದಿಂದೈತರುತಿರಲ್ಕೆ ಸುರಗಣಗಳು ॥
ಅವಸರದಿ, ಕಾಲ್‌ಜಾರಿ ಬೀಳಲ್ಕೆ ಭಿನ್ನಾವ॥
ಯವರಾಗಿ, ಸ್ಮೃತಿತಪ್ಪಿ ಸ್ತಬ್ಧರಾಗಿರಲವರ।
ದೆ, ವಸತಿಯಿದೆಂಬ ತೆರದಿಂದಲೀ ನಮ್ಮ ವಿಜಯನಗರಂ ಕಾಣ್ಬುದೀಗ ॥೯॥

॥ವಾ॥ಷ॥

ಕಳಕೊಂಡು ಪೋಷ್ಯವರ್ಗವ ಶೋಕವಶಳಾಗಿ।
ಕಳವಳವಗೊಳ್ಳುತ್ತ, ಮೈಯರಿಯದಲೆ, ಬಂಡೆ।
ಗಳ ಮೇಲೆ ದೊಪ್ಪ ದೊಪ್ಪನೆ ಬೀಳುತೇಳುತ್ತಲಿನ್ನೇನು ಮಾಡಲೆಂದು ॥
ಅಳುತ ಬಹುದೊಡ್ಡದನಿಯಿಂದ ಲಿಲ್ಲಿದ್ದಿನ್ನು।
ಫಲವಿಲ್ಲವೆಂದೆನುತ ತುಂಗಭದ್ರೆಯು ಸಾಗಿ।
ಹಳುತಾನು ಮುಂದಕ್ಕೆ ಮತ್ತೊಂದು ದೇಶಕ್ಕೆ ಶಾಂತತೆಯ ನಿಚ್ಛಿಸುತಲೀ ॥೧೦॥

॥ಕಂದ॥

ಕಾಮಿಸಿ, ಕಾಮಿನಿಕಬರೀ-।
ಕೋಮಲ-ಕುಸುಮಗಳ ಕಂಪನುರಿಮುಖಕಂಪಂ॥

ನೇಪುದೊಲು, ಬರಲು ಭ್ರಮರಂ।
ಹಾ! ಮಾಜಲ್ಕಾಯ್ತುದೀಗಳಿಲ್ಲುಪವಾಸಂ ॥೧೯॥

॥ಮಾಲಿನೀವೃತ್ತ॥

ಬರುತ ಕುಸುಮಬಾಣಂ ಜೇಟೆಯಾಡಿಚ್ಛೆಪೂರ್ಣಂ।
ಮರುಳಿಸುಖದಿ ಪೋಗುತ್ತಿರ್ದನೀ ಪೂರ್ವದಿಲ್ಲಿಂ।
ತಿರುಗಿತಿರುಗಿ ಬೆಂಡಾಗಲ್ ಕಣಾ ಬೇಂಟೆಯೊಂದುಂ।
ದೊರಕದರೆರಿಂದೀಗಂ, ಕಾಮುಗಲ್ಕಾಯ್ತರಣ್ಯಂ ॥೨೦॥

॥ಕಂದ॥

ಕ್ಷಿತಿಯೊಳಗೀತೆರದಿಂನಿಪು।
ಣತೆಯಿಂ ಕೊರೆಯಹುದೆ? ಕಠಿಣ ಕಲ್ಗೊಳಗೆಂದುಂ॥
ಅಥವಾ ಶಿಲೆಯ್ಯಾಗೆಮ್ಮನೃ।
ಪತಿಗಳಶೌರ್ಯಕ್ಕೆ ಮಾರ್ದವವ ಪೊಂದಿರ್ದುದು॥೨೧॥

॥ವಾ॥ಷ॥

ಒಂದುಕಡೆಯೋಳ್ಕಾಣ್ಬ ವಿಶ್ವಕರ್ಮನ ಮತಿಯ।
ಮಂದತೆಯ ವ್ಯಕ್ತಗೊಳಿಸುವ ಕಲೆಯ ಕುರುಹು, ಮ।
ತ್ತೊಂದು ಕಡೆಯೋಳ್ ತೋರ್ಪ, ಕಲ್ಲಕಂಬಗಳಲ್ಲಿ ಸ
ಪ್ತ ಸ್ವರಗಳು ಕರ್ಣಕಾ॥

---

೧ "ಈಪುರವು ಅರಣ್ಯದಂತೆ ತೋರುತ್ತಿದ್ದರೂ, ಕಾಮನಿಗೆ ಬೇಟೆಯೊಂದೂ ಶಿಗದ ಕಾರಣ ಅವನ ವಿಷಯಕ್ಕೆ ಮಾತ್ರ ಅರಣ್ಯವೆನಿಸಲಾರದು." ಎಂಬರ್ಥ,

ನೆಂದವಂ ಜನಿಸುತಿಹ ಕುಶಲತೆಯ, ಚಿನ್ಹ, ವಿ।
ನ್ನೊಂದು ಕಡೆಯೊಳಗೆಸೆವ, ಚಿತ್ರವೈಚಿತ್ರ್ಯಂಗ।
ಳಂದವೆನಿಸುವ ಗುರುತು ನಮ್ಮ ಪುರಸೌಭಾಗ್ಯ ಸೌಂ
ದರ್ಯವನ್ನರಿವುವು ॥೧೪॥

॥ಶ॥ಷ॥

ಕಲ್ಲಿನಬೆಟ್ಟವು।
ಕಲ್ಲಿನ ಗೊಟ್ಟವು।
ಕಲ್ಲಿಂ ಕಟ್ಟಿದ ಕಟ್ಟಡವೂ॥
ಕಲ್ಲಿನ ಗಡಿಯಿರೆ।
ಕಲ್ಲಿನ ಗುಡಿಮೇಣ್।
ಕಲ್ಲಂಗಡಿಯಿದು ಕಲ್ಲಪುರಂ ॥೧೫॥

ವಾ॥ಷ॥

ಎಲ್ಲಿ ನೋಡಿದಡಲ್ಲಿ ಕ್ರೀಡೆಯಸ್ಥಾನಂಗ।
ಳೆಲ್ಲಕಡೆಯೊಳ್ ಶ್ರೇಷ್ಠಮನೆಗಳೆರಮನೆಗಳೆ।
ಲ್ಲೆಲ್ಲಿ ನೋಡಲು ಸಹ ಸಭಾಮಂಟಪಗಳು ಮಂಟಪ
ಗಳೀ ನಗರದಲ್ಲಿ॥

ಎಲ್ಲಿ ನೋಡಿದಡಲ್ಲಿ ಗುಡಿಗೋಪುರೆಗಳೆ।
ಲ್ಲೆಲ್ಲಿ ನೋಡಲು ಮಹಾದೇಪದೇವತೆಗಳಿಹ।
ವೆಲ್ಲವವು ನೆಲಕೆರಗಿ ಮರುಗುತಿಹವುದ್ಧಾರಮಾಡಲಾರಿ
ಲ್ಲವೆಂದು ॥೧೬॥

ಘುಡುಘುಡಿಸುತಾರ್ಭಟಿಸುತತಿ ಘೋರತರವಾಗಿ
ಪೊಡವಿಯಲಿ ತಾನೊಬ್ಬನೇ ವೀರನೆನ್ನುವಂ।
ತಡವಿಯಲಿ ತಿರುತಲೆ ಮದ್ದಾನೆ ಮೊದಲಾದ ಮೃಗ
ಗಳಂ ಕೊಂದು ತಿಂದು
ಸಡಗರದಿ ಮೆರೆಯುತಿರೆ ಕಾಲವಶದಿಂ ಮೃತಿಯ।
ಪಡೆದು ಬಿದ್ದಿರುವ ಪಶುರಾಜ ಕೇಸರಿಯಂತೆ।
ಕಡುಪರಾಕ್ರಮದಿ ಪೆಸರಂ ಪಡೆದ ಪಟ್ಟಣದ ಗತಿಯಾ
ಯ್ತದೇಂ ಪೇಳ್ವೆನು ॥೧೭॥

॥ ಚಂಪಕ ಮಾಲಾವೃತ್ತ ॥

ಬಗೆಗೊಳೆಬಣ್ಣಿಸಲ್ಕೆ ಚತುರಾಸ್ಯಗಸಾಧ್ಯವು ಪೂ
ರ್ವಕಾಲದಾ
ಸೊಗಯಿಸುವುನ್ನತಸ್ಥಿತಿಯು ನಮ್ಮಯ ರಾಜ್ಯದ
ಮೇಣದೀಗಿನೀ
ನಗೆ ಬರುವಂಥ ದುಃಸ್ಥಿತಿಯದಿಂತಿರೆ ಮಾನವಗೆ
ನು ಬರ್ಪುದೇ
ಪೊಗಳಲು, ಮೇಲೆ ಪೋಗ್ಪುದೆನಿತಷ್ಟು ಬಲಾತ್ ಪತ
ನಾಗ್ಪುದಲ್ಲವೇ ? ॥೧೮

॥ ತ್ರಿಪುಡೆ ॥

ಅಡವಿಯಲಿ ಸಿಂಹನ ಪ್ರತಿಧ್ವನಿಗಾನೆಗಳ್ ಬೆ
ರುವತೆರಂ
ಪೊಡವಿಪರು ಭಯಪಡುವರೀಗಲು ಪೆಸರಕೇಳೀರ
ಜ್ಯದ ॥೧೯

॥ ವಸಂತ ತಿಲಕಾವೃತ್ತ ॥

ಈ ಕಾಯಮಂ ತೊರೆಯಲೆಂತು ಮಹಾತ್ಮರೆಂಬರ್।
ಆಕಾಶದೋಳ್ ಪೊಳೆವರಾರಿಲದಂತೆಯಂತುಂ ॥
ಭೂಕಾಯಮಂ ತೊಲಗಲೆನ್ಮಿ ತಿ ಹಾಸದೀಗಂ ।
ಮಾಕೀರ್ತಿಯಿಂದ ನೆರೆರಾಜಿಪುದೀ **ಸುರಾಜ್ಯಂ** ॥೨೦॥





ಈ ಪತ್ರಿಕೆ ಜಿ.ಎನ್. ಗಿಣಿಮಾವ ಇವರು ತಮ್ಮ ದಿ. ನ್ಯೂ. ಪ್ರಿಂಟಿಂಗ ವರ್ಕ್ಸ ಹುಬ್ಬಳ್ಳಿ ಇಲ್ಲಿ ಮುದ್ರಿಸಿ ಅರ್. ಕೆ. ಕಡಸ ಇವರು ತಮ್ಮ ಮನೋಹರ ಗ್ರಂಥಮಾಲಾ ಆಫೀಸ ಹುಬ್ಬಳ್ಳಿ ಇಲ್ಲಿ ಪ್ರಸಿದ್ಧಿಸಿದರು.

